# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 9(38)

ಸದಸ್ಯರ ಹೆಸರು :ಶ್ರೀ ಎನ್.ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 21.09.2020

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ಕಾರಿ ಪದವಿ ಮತ್ತು ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಸೇವೆ ಸಲ್ಲಿಸಿರುವ ಅತಿಥಿ ಉಪನ್ಯಾಸಕರುಗಳಿಗೆ ಬಹಳ ಸಮಯದಿಂದ ವೇತನ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಬಂದಿದೆ.<br>**2020-21** ನೇ ಸಾಲಿನಲ್ಲಿ ಸರ್ಕಾರವು ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಅತಿಥಿ ಉಪನ್ಯಾಸಕರ ಭತ್ಯೆ ಪಾವತಿಸಲು ರೂ. **408.00** ಲಕ್ಷಗಳನ್ನು ನಿಗದಿಗೊಳಿಸಿದ್ದು, ಸದರಿ ಅನುದಾನದಲ್ಲಿ **2019-20** ಮತ್ತು ಹಿಂದಿನ ಸಾಲಿನಲ್ಲಿ ಅತಿಥಿ ಉಪನ್ಯಾಸಕರಿಗೆ ಪಾವತಿಸಬೇಕಾದ ಬಾಕಿ ಗೌರವಧನವನ್ನು ಪಾವತಿಸಲು ಅನುಮತಿಗಾಗಿ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗಿದ್ದು, ಅನುಮತಿ ದೊರತೆ ಕೂಡಲೇ ಅತಿಥಿ ಉಪನ್ಯಾಸಕರುಗಳಿಗೆ ಹಿಂದಿನ ಬಾಕಿಯನ್ನು ಪಾವತಿಸಲು ಕ್ರಮವಹಿಸಲಾಗುವುದು.<br>ಉಳಿದಂತೆ **2020-21** ನೇ ಸಾಲಿನಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಮತ್ತು ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕೋರ್ಸ್ ಮತ್ತು ಕಾರ್ಯಭಾರವನ್ನು ತರ್ಕಬದ್ಧಗೊಳಿಸಿ **2020-21** ನೇ ಸಾಲಿನಲ್ಲಿ ಅತಿಥಿ ಉಪನ್ಯಾಸಕರ ಗೌರವಧನ ಪಾವತಿಗೆ ಒಟ್ಟಾರೆ ಒದಗಿಸಿರುವ ಅನುದಾನದ ಮಿತಿಯಲ್ಲಿಯೇ ಉಳಿತಾಯವಾಗಲಿರುವ ಲೆಕ್ಕ ಶೀರ್ಷಿಕೆಯಿಂದ ಪುನರ್ವಿನಿಯೋಗ ಮಾಡಿಕೊಂಡು ಅತಿಥಿ ಉಪನ್ಯಾಸಕರ ಗೌರವಧನ ಪಾವತಿಸಲು ಕ್ರಮವಹಿಸಲಾಗುವುದು.<br><br>2019-20ನೇ ಶೈಕ್ಷಣಿಕ ಸಾಲಿನಲ್ಲಿ ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಒಟ್ಟು 14228 ಅತಿಥಿ ಉಪನ್ಯಾಕರು ಕಾರ್ಯ ನಿರ್ವಹಿಸಿರುತ್ತಾರೆ. ಸದರಿ ಸಾಲಿನಲ್ಲಿ ಜುಲೈ-2019ರಿಂದ 23.03.2020ರ ವರೆಗೆ ಅಂದರೆ ಲಾಕ್‌ಡೌನ್ ಪ್ರಾರಂಭವಾದ ದಿನಾಂಕ:24.03.2020ರ ನಿಕಟ ಪೂರ್ವ ದಿನಾಂಕದವರೆಗೆ ಸಂಭಾವನೆಯನ್ನು ಪಾವತಿಸಲಾಗಿರುತ್ತದೆ. ತದನಂತರ 2019-20ನೇ ಶೈಕ್ಷಣಿಕ ಸಾಲಿನಲ್ಲಿ ಬಾಕಿ ಉಳಿದಿರುವ ಪಠ್ಯ ಕ್ರಮವನ್ನು ಆನ್‌ಲೈನ್ ಮುಖಾಂತರ ಬೋಧನೆಯನ್ನು ಮಾಡಲು ಸೂಚಿಸಿರುವಂತೆ ಪೂರ್ಣಕಾಲಿಕ ಬೋಧಕರುಗಳು ಕ್ರಮವಹಿಸಿರುತ್ತಾರೆ, ಆದ್ದರಿಂದ 2019-20ನೇ ಸಾಲಿನಲ್ಲಿ |

<table>
<tr><td></td><td></td><td>ಯಾವುದೇ ಬಾಕಿ ಉಳಿದಿರುವುದಿಲ್ಲ. 2020-21ನೇಶೈಕ್ಷಣಿಕ ಸಾಲಿನಲ್ಲಿ ತರಗತಿಗಳು ಇನ್ನೂ ಪ್ರಾರಂಭವಾಗಿರುವದಿಲ್ಲವಾದ್ದರಿಂದ ಅತಿಥಿ ಉಪನ್ಯಾಸಕಸರನ್ನು ನೇಮಕ ಮಾಡಿಕೊಂಡಿಲ್ಲದಿರುವುದರಿಂದ ಪ್ರಯುಕ್ತ 2020-21ನೇ ಸಾಲಿನಲ್ಲಿ ಯಾವುದೇ ಬಾಕಿ ಇರುವುದಿಲ್ಲ.</td></tr>
<tr><td>(ಆ)</td><td>ವಿದ್ಯುಚ್ಛಕ್ತಿ, ದೂರವಾಣಿ, ವಾಹನ, ಸೆಕ್ಯೂರಿಟಿಗೆ ಸಂಬಂಧಪಟ್ಟ ಅನುದಾನವನ್ನು ಬಹಳ ಸಮಯದಿಂದ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು;<br>(ಸಂಪೂರ್ಣಮಾಹಿತಿನೀಡುವುದು)</td><td>ಬಂದಿದೆ.<br>ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಿಗೆ 2018-19, 2019-20 ಮತ್ತು 2020-21ನೇ ಸಾಲಿನಲ್ಲಿ ವಿದ್ಯುಚ್ಛಕ್ತಿ, ದೂರವಾಣಿ, ವಾಹನ, ಸೆಕ್ಯೂರಿಟಿ, ಅತಿಥಿ ಉಪನ್ಯಾಸಕರ ಭತ್ಯೆ, ಕಛೇರಿ ವೆಚ್ಚಗಳಿಗೆ ಸಂಬಂದಪಟ್ಟಂತೆ ಕಡಿಮೆ ಅನುದಾನ ಬಿಡುಗಡೆಯಾಗಿದ್ದು, ಅನುದಾನದ ಕೊರತೆ ಉಂಟಾಗಿದೆ.<br>(ಲಕ್ಷ ರೂಗಳಲ್ಲಿ)
<table>
<tr><th>ಕ್ರಮ ಸಂಖ್ಯೆ</th><th>ವರ್ಷ</th><th>ಸರ್ಕಾರದಿಂದ ಕೋರಲಾದ ಅನುದಾನ</th><th>ಸರ್ಕಾರದಿಂದ ಒದಗಿಸಲಾದ ಅನುದಾನ</th></tr>
<tr><td>1</td><td>2020-21</td><td>688.10</td><td>15.00</td></tr>
<tr><td>2</td><td>2019-20</td><td>946.28</td><td>14.00</td></tr>
<tr><td>3</td><td>2018-19</td><td>1226.05</td><td>5.00</td></tr>
<tr><td></td><td>ಒಟ್ಟು</td><td>2860.43</td><td>34.00</td></tr>
</table>
2019-20ನೇ ಸಾಲಿಗೆ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರುಗಳ ಭತ್ಯೆ, ಸೆಕ್ಯೂರಿಟಿ ಗಾರ್ಡ್‌ಗಳ ಭತ್ಯೆ, ವಿದ್ಯುತ್-ನೀರು ದೂರವಾಣಿ ವೆಚ್ಚ, ಕಟ್ಟಡ ಬಾಡಿಗೆ ಹಾಗೂ ಕಛೇರಿ ವೆಚ್ಚಗಳನ್ನು ಭರಿಸಲು ಅನುದಾನಿತ ಕೊರತೆಯ ಪರಿಸ್ಥಿತಿಯನ್ನು ವಿವರಿಸಿ ಹೆಚ್ಚುವರಿ ಅನುದಾನ ರೂ. 1647.56 ಲಕ್ಷಗಳನ್ನು ಒದಗಿಸಲು ಈ ಕಛೇರಿ ಪತ್ರಸಂಖ್ಯೆ: ಡಿಟಿಇ05ಡಿವಿಪಿ(1) 2019, ದಿನಾಂಕ01-06-2019, 06-06-2019, 15-07-2019, 18-11-2019, 20-12-2019, 30-12-2019 ಮತ್ತು 19-02-2020ರಲ್ಲಿ ಹಲವಾರು ಬಾರಿ ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸಲಾಗಿದ್ದು, ಸರ್ಕಾರದಿಂದ ಹೆಚ್ಚುವರಿ ಅನುದಾನ ಬಿಡುಗಡೆ ಆಗಿರುವುದಿಲ್ಲ.<br>2020-21ನೇ ಸಾಲಿನಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ವಿದ್ಯುಚ್ಛಕ್ತಿ, ದೂರವಾಣಿ, ವಾಹನ, ಸೆಕ್ಯೂರಿಟಿ, ಅತಿಥಿ ಉಪನ್ಯಾಸಕರ ಭತ್ಯೆ, ಕಛೇರಿ ವೆಚ್ಚಗಳಿಗೆ ಇಲಾಖೆಯ ಇತರೆ ಲೆಕ್ಕ ಶೀರ್ಷಿಕೆಯಲ್ಲಿ ಉಳಿತಾಯವಾಗುವ ಅನುದಾನದಿಂದ ಪುನರ್‌ವಿನಿಯೋಗ ಮಾಡಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸಲಾಗುವುದು.</td></tr>
</table>

| | | |
|---|---|---|
| | | ಸರ್ಕಾರಿ ಪದವಿ ಕಾಲೇಜುಗಳಿಗೆ ಆಯಾ ಸಾಲಿನಲ್ಲಿ ವಿದ್ಯುತ್ ಮತ್ತು ದೂರವಾಣಿ ವೆಚ್ಚಗಳಿಗೆ ಸರ್ಕಾರ ಒದಗಿಸಿರುವ ಅನುದಾನದಲ್ಲಿ ಬಿಡುಗಡೆ ಮಾಡಲಾಗಿರುತ್ತದೆ. ಸರ್ಕಾರಿ ಕಾಲೇಜುಗಳಿಗೆ ಯಾವುದೇ ವಾಹನ ಸೌಲಭ್ಯವನ್ನು ನೀಡಿರುವುದಿಲ್ಲ. ಹಾಗೂ ಯಾವುದೇ ಸೆಕ್ಯೂರಿಟಿಗಳನ್ನು ನೇಮಕ ಮಾಡಿಕೊಂಡಿರುವುದಿಲ್ಲ. |
| (ಇ) | ಸರ್ಕಾರಿ ಪದವಿ ಮತ್ತು ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ/ಬೋಧಕೇತರ ಹುದ್ದೆಗಳೆಷ್ಟು; ಅವುಗಳನ್ನು ಯಾವಾಗ ಭರ್ತಿ ಮಾಡಲಾಗುವುದು? (ವಿವರನೀಡುವುದು) | ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಬೋಧಕ ಸಿಬ್ಬಂದಿಗಳ ವಿವರ ಈ ಕೆಳಕಂಡತಿದೆ. |

| ಕ್ರ. ಸಂ | ಹುದ್ದೆಗಳ ಪದನಾಮ | ಮಂಜೂರಾದ ಹುದ್ದೆಗಳು | ಭರ್ತಿಯಾಗಿರುವ ಹುದ್ದೆಗಳು | ಖಾಲಿಯಿರುವ ಹುದ್ದೆಗಳು |
|---|---|---|---|---|
| 1 | ಪ್ರಾಂಶುಪಾಲರು ಇಂಜಿನಿಯರಿಂಗ್ | 10 | 5 | 5 |
| 2 | ಪ್ರಾಧ್ಯಾಪಕರು | 64 | 16 | 48 |
| 3 | ಪ್ಲೇಸ್‌ಮೆಂಟ್ ಆಫೀಸರ್ | 10 | 0 | 10 |
| 4 | ಸಹಾಯಕ ಪ್ರಾಧ್ಯಾಪಕರು (ಗ್ರೂಪ್-ಎ) | 145 | 91 | 54 |
| 5 | ಸಹಾಯಕ ಪ್ರಾಧ್ಯಾಪಕರು (ಗ್ರೂಪ್-ಬಿ) | 397 | 228 | 169 |
| 6 | ಸಹಾಯಕ ನಿರ್ದೇಶಕರು [ದೈಹಿಕಶಿಕ್ಷಣ ಮತ್ತು ಕ್ರೀಡೆ] | 10 | 6 | 4 |
| 7 | ಗ್ರಂಥಪಾಲಕರು | 10 | 5 | 5 |

ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಬೋಧಕ ಸಿಬ್ಬಂದಿಗಳನ್ನು ಎಐಸಿಟಿಇ ನಿಯಮಗಳನ್ವಯ ಭರ್ತಿ ಮಾಡಬೇಕಾಗಿದ್ದು, ಮಾರ್ಚ್ 2019 ರಂದು 07 ನೇ ಎಐಸಿಟಿಇ ನಿಯಮಗಳನ್ನು ಜಾರಿಗೆ ತರಲಾಗಿದ್ದು, ಇದರನ್ವಯ, ನೇಮಕಾತಿ ವಿಧಾನ, ವಿದ್ಯಾರ್ಹತೆ ಮತ್ತು ಸೇವಾ ಷರತ್ತುಗಳನ್ನು ವೃಂದ ಮತ್ತು ನೇಮಕಾತಿ ನಿಯಮಾವಳಿಗಳಲ್ಲಿ ಅಳವಡಿಸಿಕೊಂಡ ನಂತರ ಸದರಿ ಹುದ್ದೆಗಳನ್ನು ಭರ್ತಿ ಮಾಡಬೇಕಾಗಿರುತ್ತದೆ. ಅಂತಿಮ ಹಂತದ ಪರಿಶೀಲನೆಯಲ್ಲಿದ್ದು ನೇಮಕಾತಿ ನಿಯಮಗಳು ತಿದ್ದುಪಡಿಯಾದ ಕೂಡಲೇ ಸದರಿ ಹುದ್ದೆಗಳನ್ನು ಭರ್ತಿ

ಮಾಡಲು ಕ್ರಮ ಜರುಗಿಸಲಾಗುವುದು.

ಸರ್ಕಾರಿ ಪದವಿ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳ ಮಾಹಿತಿಯನ್ನು ಅನುಬಂಧ-1ರಲ್ಲಿ ನೀಡಿದೆ.

***ಪ್ರಾಂಶುಪಾಲರು;***

ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಪ್ರಾಂಶುಪಾಲರ ಹುದ್ದೆಗಳನ್ನು ಯು.ಜಿ.ಸಿ ಮಾರ್ಗಸೂಚಿಗಳು/ಮಾನದಂಡಗಳನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆದೇಶಿಸಲಾಗಿದೆ. ಅದರಂತೆ ಸರ್ಕಾರದ ಹಂತದಲ್ಲಿ ತೆಗೆದುಕೊಂಡ ತೀರ್ಮಾನದಂತೆ ಒಟ್ಟು 310 ಪ್ರಾಂಶುಪಾಲರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಂಬಂಧ ದಿನಾಂಕ:09.09.2020ರ ಸಂಖ್ಯೆ:ಇಡಿ/121/ಡಿಸಿಇ/2018ರಲ್ಲಿ ನಿಯಮಗಳನ್ನು ರೂಪಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗಿದೆ.

***ಸಹಾಯಕ ಪ್ರಾಧ್ಯಾಪಕರು;***

ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿ ಇರುವ 1242 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ದಿನಾಂಕ:08.07.2020 ರ ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ/257/ಡಿಸಿಇ/ 2019(ಭಾ-3) ರಲ್ಲಿ ಅಂತಿಮ ವಿಶೇಷ ನೇಮಕಾತಿ ನಿಯಮಗಳನ್ನು ಹೊರಡಿಸಲಾಗಿದೆ.

ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ 2020-21 ನೇ ಸಾಲಿನಲ್ಲಿ ಯಾವುದೇ ನೇರ ನೇಮಕಾತಿಯನ್ನು ಕೈಗೊಳ್ಳುವಂತಿಲ್ಲ ಎಂಬುದಾಗಿ ಆರ್ಥಿಕ ಇಲಾಖೆಯ ದಿನಾಂಕ:06.07.2020 ರ ಸುತ್ತೋಲೆ ಸಂಖ್ಯೆ:ಆಇ/03/ಬಿಇಎಂ/2020 ರಲ್ಲಿ ಸೂಚಿಸಲಾಗಿರುತ್ತದೆ.

ಆದಾಗ್ಯೂ, ಈಗಾಗಲೇ ಆರ್ಥಿಕ ಇಲಾಖೆಯು ಅನುಮತಿ ನೀಡಿರುವ ಒಟ್ಟು 310 ಪ್ರಾಂಶುಪಾಲರು ಮತ್ತು 1242 ಸಹಾಯಕ ಪ್ರಾಧ್ಯಾಪಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ನೇಮಕಾತಿ ಪ್ರಕ್ರಿಯೆಯನ್ನು ಕೈಗೊಳ್ಳಲು ಅನುಮತಿ ನೀಡುವಂತೆ ದಿನಾಂಕ:05.08.2020ರ ಪತ್ರದಲ್ಲಿ ಸರ್ಕಾರವನ್ನು ಕೋರಿದ್ದು ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿದೆ.

***ದೈಹಿಕ ಶಿಕ್ಷಣ ಬೋಧಕರು ಮತ್ತು ಗ್ರಂಥಪಾಲಕರು;-***

ದೈಹಿಕ ಶಿಕ್ಷಣ ಬೋಧಕರ ಹಾಗೂ ಗ್ರಂಥಪಾಲಕರ ನೇಮಕಾತಿಗೆ ಸಂಬಂಧಿಸಿದಂತೆ, ಕರಡು ನಿಯಮಗಳನ್ನು ಸಿದ್ಧಪಡಿಸಿ, ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ದಿನಾಂಕ:17/06/2020 ರ ಸರ್ಕಾರದ ಪತ್ರ ಸಂಖ್ಯೆ: ಇಡಿ 337 ಯುಇಸಿ 2014 ರಲ್ಲಿ ದೈಹಿಕ ಶಿಕ್ಷಣ ಬೋಧಕರ ಹಾಗೂ ಗ್ರಂಥಪಾಲಕರ ಹುದ್ದೆಗಳ ಭರ್ತಿಗೆ ಸಂಬಂಧಿಸಿದಂತೆ ವಿವರವಾದ ಪ್ರಸ್ತಾವನೆಯನ್ನು ಒಂದು ವರ್ಷದ ನಂತರ ಸಲ್ಲಿಸುವಂತೆ ತಿಳಿಸಲಾಗಿದೆ.

ಅಲ್ಲದೆ, ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ 2020-21 ನೇ ಸಾಲಿನಲ್ಲಿ ಯಾವುದೇ ನೇರ ನೇಮಕಾತಿಯನ್ನು ಕೈಗೊಳ್ಳುವಂತಿಲ್ಲ ಎಂಬುದಾಗಿ ಆರ್ಥಿಕ ಇಲಾಖೆಯ ದಿನಾಂಕ:06.07.2020 ರ ಸುತ್ತೋಲೆ ಸಂ:ಆಇ/03/ಬಿಇಎಂ/ 2020ರಲ್ಲಿ ಸೂಚಿಸಲಾಗಿರುತ್ತದೆ.

| | | |
|---|---|---|
| | | ***ಬೋಧಕೇತರ ಹುದ್ದೆಗಳು:***<br>ಇಲಾಖೆಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕರು & ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಪೈಕಿ 123 ಪ್ರ.ದ.ಸಹಾಯಕರು, 88 ದ್ವಿ.ದ.ಸಹಾಯಕರ ಹುದ್ದೆಗಳನ್ನು ಭರ್ತಿಮಾಡುವ ಸಂಬಂಧ ಸರ್ಕಾರದ ಪತ್ರ ಸಂಖ್ಯೆ:ಇಡಿ/116/ ಯುಇಸಿ/2016, ದಿ:21.05.2019ರಲ್ಲಿ ಅನುಮತಿ ನೀಡಲಾಗಿದ್ದು, ಅದರಂತೆ ಸದರಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಕರ್ನಾಟಕ ಲೋಕ ಸೇವಾ ಆಯೋಗವು ನೇಮಕಾತಿಗೆ ಅಧಿಸೂಚನೆಯನ್ನು ಹೊರಡಿಸಿದ್ದು, ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ನೀಡಿದ ನಂತರ ಸದರಿ ಖಾಲಿ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಲು ಕ್ರಮವಹಿಸಲಾಗುವುದು.<br><br>ಇಲಾಖೆಯಲ್ಲಿ ಖಾಲಿ ಇರುವ ಬೆರಳಚ್ಚುಗಾರರ ಮತ್ತು ಪರಿಚಾರಕರ ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ಸೇವೆಯನ್ನು ಬಳಸಿಕೊಳ್ಳಲು ಸರ್ಕಾರವು ಸೂಚಿಸಿದ್ದು, ಅದರಂತೆ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಖಾಲಿ ಇರುವ ಬೆರಳಚ್ಚುಗಾರರು ಮತ್ತು ಪರಿಚಾರಕರ (ಗ್ರೂಪ್-ಡಿ) ಹುದ್ದೆಗಳಿಗೆ ಸೇವಾ ಗುತ್ತಿಗೆ ಏಜೆನ್ಸಿ ಮುಖಾಂತರ ಸೇವೆಯನ್ನು ಪಡೆಯಲು ಪರಿಶೀಲಿಸಲಾಗುತ್ತಿದೆ. |

ಕಡತ ಸಂಖ್ಯೆ: ಇಡಿ 93 ಹೆಚ್‌ಪಿಟಿ 2020

**(ಡಾ: ಅಶ್ವಥ್ ನಾರಾಯಣ ಸಿ.ಎನ್)**
ಉಪ ಮುಖ್ಯಮಂತ್ರಿಗಳು ಹಾಗೂ
ಉನ್ನತ ಶಿಕ್ಷಣ ಸಚಿವರು